ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತೆರಡನೆಯ ಅಧಿವೇಶನ
ಮಂಗಳವಾರ, ದಿನಾಂಕ : 08 ನೇ ಡಿಸೆಂಬರ್, 2020

ರಾಜ್ಯದಲ್ಲಿರುವ ಅಮೂಲ್ಯವಾದ ಖನಿಜ ನಿಕ್ಷೇಪಗಳ ಬಗ್ಗೆ

ಶ್ರೀ ಕವಟಗಿಮಠಮಹಾಂತೇಶ ಮಲ್ಲಿಕಾರ್ಜುನ(ಸ್ಥಳೀಯಸಂಸ್ಥೆಗಳಕ್ಷೇತ್ರ):-

119 (120) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಅಪಾರ ಪ್ರಮಾಣದ ಅಮೂಲ್ಯವಾದ ಖನಿಜ ನಿಕ್ಷೇಪಗಳಿದ್ದು, ಅವುಗಳನ್ನು ಗುರುತಿಸಲು ಗಣಿ ಮತ್ತು ಭೂವಿಜ್ಞಾನ ಇಲಾಖೆ ತೆಗೆದುಕೊಂಡಿರುವ ಕ್ರಮಗಳೇನು;

(ಆ) ಸದರಿ ನಿಕ್ಷೇಪಗಳನ್ನು ಗುರುತಿಸಿ ನಿಯಮಾನುಸಾರ ವಿಲೇವಾರಿ ಮಾಡುವುದರಿಂದ ಸರ್ಕಾರದ ಬೊಕ್ಕಸಕ್ಕೆ ಅಪಾರ ರಾಜಸ್ವ ಬರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಕೋಲಾರದ ಚಿನ್ನದ ಗಣಿಯನ್ನು ಪುನರುಜ್ಜೀವನಗೊಳಿಸುವ ಬಗ್ಗೆ ಸರ್ಕಾರ ಯೋಚಿಸಿದೆಯೇ ;

(ಈ) ಹಾಗಿದ್ದಲ್ಲಿ, ಇದನ್ನು ಯಾವಾಗ ಮತ್ತು ಯಾವ ಹಂತದಲ್ಲಿ ಪುನರಾರಂಭಗೊಳಿಸಲಾಗುವುದು ?